# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಡಾ॥ ವೈ.ಎ. ನಾರಾಯಣಸ್ವಾಮಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1094

ಉತ್ತರಿಸಬೇಕಾದ ದಿನಾಂಕ : 21.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯ ಕೇಂದ್ರ ಸಹಕಾರ ಬ್ಯಾಂಕ್ ವತಿಯಿಂದ ರೂ. 50 ಲಕ್ಷಗಳಿಗಿಂತಲೂ ಹೆಚ್ಚಿನ ಸಾಲವನ್ನು ಪಡೆದಿರುವಂತಹ ಫಲಾನುಭವಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಿಂದ ರೂ. 50.00 ಲಕ್ಷಗಳಿಗಿಂತ ಹೆಚ್ಚಿನ ಸಾಲವನ್ನು 03 ಫಲಾನುಭವಿಗಳಿಗೆ ಒಟ್ಟು ರೂ.1960.00 ಲಕ್ಷಗಳ ಸಾಲವನ್ನು ಮಂಜೂರು ಮಾಡಲಾಗಿರುತ್ತದೆ. ಫಲಾನುಭವಿವಾರು ವಿವರ ಈ ಕೆಳಕಂಡಂತಿರುತ್ತದೆ. |

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಫಲಾನುಭವಿಯ ಹೆಸರು | ಸಾಲದ ಉದ್ದೇಶ | ವಿತರಿಸಿದ ಸಾಲದ ಮೊತ್ತ |
|---|---|---|---|
| 1 | ಶ್ರೀ. ಎಸ್.ಎನ್. ನಿಶಾಂತ್ | ಕೋಳಿ ಸಾಕಾಣಿಕೆ | 1000.00 |
| 2 | ಶ್ರೀ. ಎಂ. ನಾರಾಯಣಸ್ವಾಮಿ | ಕೋಳಿ ಸಾಕಾಣಿಕೆ | 460.00 |
| 3 | ಶ್ರೀಮತಿ. ಪ್ರೀತಿ ಬಿ.ಎನ್ | ಕನ್ವೆಂಷನ್ ಹಾಲ್ ನಿರ್ಮಿಸಲು | 500.00 |
| | | ಒಟ್ಟು | **1960.00** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಮೇಲ್ಕಂಡ ಫಲಾನುಭವಿಗಳಿಗೆ ಸಾಲ ವಿತರಣೆ ಮಾಡಲು ಡಿ.ಸಿ.ಸಿ ಬ್ಯಾಂಕ್ ಅನುಸರಿಸಿರುವ ಮಾನದಂಡಗಳೇನು; | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಈ ಮೇಲ್ಕಂಡ ಫಲಾನುಭವಿಗಳಿಗೆ ಸಾಲ ಮಂಜೂರು ಮಾಡಲು ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗಿದೆ.<br>• ಫಲಾನುಭವಿಗಳಿಂದ ಸಾಲ ಮಂಜೂರು ಮಾಡುವಂತೆ ಕೋರಿ ಸಾಲದ ಅರ್ಜಿ.<br>• ಸಾಲದ ಭದ್ರತೆಗಾಗಿ ಅರ್ಜಿದಾರರು ಅಪೇಕ್ಷಿಸಿರುವ ಸಾಲದ ಮೊತ್ತಕ್ಕಿಂತ ಹೆಚ್ಚಿನ ಮೌಲ್ಯದ ಸ್ಥಿರಾಸ್ತಿಯ ದಾಖಲೆಗಳನ್ನು ಪಡೆದು, ದಾಖಲೆಗಳ ನೈಜತೆಯ ಬಗ್ಗೆ ಬ್ಯಾಂಕಿನ ಪ್ಯಾನಲ್‌ನಲ್ಲಿರುವ ವಕೀಲರಿಂದ ಕಾನೂನು ಸಲಹೆ ಪಡೆಯಲಾಗಿರುತ್ತದೆ.<br>• ಸ್ಥಿರಾಸ್ತಿಯ ಮೌಲ್ಯದ ಬಗ್ಗೆ ಬ್ಯಾಂಕಿನ ಪ್ಯಾನಲ್‌ನಲ್ಲಿರುವ ಇಂಜಿನಿಯರ್‌ರವರಿಂದ ಆಸ್ತಿ ಮೌಲ್ಯ ವರದಿ ಪಡೆಯಲಾಗಿರುತ್ತದೆ.<br>• ವಂಶವೃಕ್ಷ ಪ್ರಮಾಣ ಪತ್ರ. |

| | | |
|---|---|---|
| | | • ಫಲಾನುಭವಿಗಳಿಂದ ಕೆ.ವೈಸಿ ದಾಖಲೆಗಳು.<br>• ಕೋಳಿ ಫಾರಂ & ಕನ್ವೆಂಷನ್ ಹಾಲ್ ನಿರ್ಮಿಸಲು ಪ್ಲಾನ್ ಮತ್ತು ಎಸ್ಟಿಮೇಟ್.<br>• ಈ ಮೇಲ್ಕಂಡಂತೆ ಪಡೆದ ದಾಖಲೆಗಳನ್ನು ಬ್ಯಾಂಕಿನ ಆಡಳಿತ ಮಂಡಳಿ ಸಭೆಯಲ್ಲಿ ಮಂಡಿಸಿ ಸಮಾಜ ಕಲ್ಯಾಣ ಇಲಾಖೆ ರವರ ಆದೇಶ ಸಂಖ್ಯೆ: ಸಕಇ 158 ಎಸ್‌ಎಸ್‌ಪಿ 2016, ಬೆಂಗಳೂರು. ದಿ:18.06.2016 ರಂದು ಹೊರಡಿಸಿರುವ ಆದೇಶದಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ಯಮಿಗಳಿಗೆ ಜಾರಿಯಲ್ಲಿರುವ ಶೇ.4ರ ಬಡ್ಡಿದರದಲ್ಲಿ ಸಾಲ ಮಂಜೂರು ಮಾಡಲಾಗಿರುತ್ತದೆ.<br>ಸಾಲ ಮಂಜೂರು ಮಾಡಿದ ನಂತರ ಸಾಲದ ಭದ್ರತೆಗಾಗಿ ನೀಡಿರುವ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಉಪನೋಂದಣಾಧಿಕಾರಿಗಳಿಂದ ಅಡಮಾನ ಮಾಡಿಕೊಂಡು ಕಾಮಗಾರಿಯ ಪ್ರಗತಿಯನ್ನು ಅನುಸರಿಸಿ ಹಂತ ಹಂತವಾಗಿ ಸಾಲ ಬಿಡುಗಡೆ ಮಾಡಲಾಗಿರುತ್ತದೆ. |
| ಇ) | ಮೇಲ್ಕಂಡ ಸಾಲ ನೀಡುವಿಕೆಯಲ್ಲಿ ನಿಯಮ ಉಲ್ಲಂಘನೆ ಮಾಡಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವಿವರಗಳನ್ನು ನೀಡುವುದು; | ಸಾಲ ನೀಡುವಿಕೆಯಲ್ಲಿ ನಿಯಮಗಳನ್ನು ಉಲ್ಲಂಘನೆ ಮಾಡಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ನಿಯಮ ಬಾಹಿರವಾಗಿ ಇಂತಹ ಸಾಲಗಳನ್ನು ಶಿಫಾರಸ್ಸು ಮಾಡುವ ಮತ್ತು ಅನುಮೋದನೆ ಮಾಡುವ ನಿರ್ದೇಶಕರು/ಅಧಿಕಾರಿಗಳ ವಿರುದ್ಧ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಅನ್ವಯಿಸುವುದಿಲ್ಲ. |

**ಸಂಖ್ಯೆ: ಸಿಒ 274 ಸಿಎಲ್‌ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು